# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 195**

**ಸದಸ್ಯರ ಹೆಸರು : ಶ್ರೀ ಡಿ.ಎಸ್. ಅರುಣ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)**

**ಉತ್ತರಿಸಬೇಕಾದ ದಿನಾಂಕ : 16.02.2022**

**ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು**

| ಪ್ರಶ್ನೆ | ಉತ್ತರ |
|---|---|
| **(ಅ)** ರಾಜ್ಯದಲ್ಲಿ ಪ್ರಕೃತಿ ವಿಕೋಪದಿಂದ ಹಾನಿಗೊಳಗಾದ ಮನೆಗಳೆಷ್ಟು ಅಂತಹ ಮನೆಗಳಿಗೆ ಪೂರ್ಣ ಪ್ರಮಾಣ ಪರಿಹಾರ ನೀಡಲಾಗಿದೆಯೇ ಬಾಕಿ ಇದ್ದಲ್ಲಿ ಯಾವ ಕಾರಣಗಳಿಗೆ ಪರಿಹಾರ/ಮನೆ ನಿರ್ಮಿಸಲು ಅನುದಾನ ನೀಡಿರುವುದಿಲ್ಲ; | 2021ನೇ ಸಾಲಿನ ಜುಲೈ, ಆಗಸ್ಟ್, ಅಕ್ಟೋಬರ್ ಮತ್ತು ನವೆಂಬರ್ ಮಾಹೆಯಲ್ಲಿ ಉಂಟಾದ ಅತಿವೃಷ್ಟಿ/ಪ್ರವಾಹದಿಂದ 53,021 ಮನೆಗಳು ಹಾನಿ ಉಂಟಾಗಿದೆ. ಪೂರ್ಣ ಹಾಗೂ ತೀವ್ರ ಮನೆ ಹಾನಿ ಪ್ರಕರಣಗಳಿಗೆ ಮೊದಲ ಕಂತಿನಲ್ಲಿ ತಲಾ ರೂ.95,100/-ರಂತೆ ಹಾಗೂ ಭಾಗಶಃ ಹಾನಿಯಾದ ಮನೆಗಳಿಗೆ ತಲಾ ರೂ.50,000/-ದಂತೆ ಪರಿಹಾರ ಪಾವತಿಸಲು ರೂ.400.52ಕೋಟಿಗಳನ್ನು ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ. ಪೂರ್ಣ ಹಾಗೂ ತೀವ್ರ ಮನೆ ಹಾನಿಯಾದ ಸಂತ್ರಸ್ಥರು ಸ್ವತಃ ತಾವೇ ಖುದ್ದಾಗಿ ಮನೆ ನಿರ್ಮಿಸಿಕೊಳ್ಳಬೇಕಾಗಿದ್ದು, ಮನೆ ನಿರ್ಮಾಣದ ಪ್ರಗತಿಯನುಸಾರ ಹಂತ ಹಂತವಾಗಿ ವಿವಿಧ ಕಂತುಗಳಲ್ಲಿ ಪರಿಹಾರ ಪಾವತಿಸಲಾಗುತ್ತದೆ. |
| **(ಆ)** ಪ್ರಕೃತಿ ವಿಕೋಪದಿಂದ ಹಾನಿಗೊಳಗಾದ ಮನೆಗಳಿಗೆ ನೀಡಿದ, "ಬಿ ಮತ್ತು ಸಿ" ವರ್ಗದ ಪರಿಹಾರ ಪಡೆದ (ಅಂದರೆ 25-50ಸಾವಿರ) ಬಡವರ ಹೆಸರಿನಲ್ಲಿ ವಸತಿ ನಿಗಮದಲ್ಲಿ 1.ದಿ. ಕ್ರಿಯೇಟ್ ಆಗಿದ್ದು ಇವರಿಗೆ ಹೊಸದಾಗಿ ವಸತಿ ಯೋಜನೆಯ ಮನೆಗಳನ್ನು ನೀಡಲು ಸಾಧ್ಯವಾಗುತ್ತಿಲ್ಲ, ಇಂತಹ ಬಡವರ ಹಿತಕಾಯಲು ಸರ್ಕಾರದಿಂದ ಯಾವ ರೀತಿಯ ಮಾರ್ಗಸೂಚಿಗಳನ್ನು ನೀಡಲಾಗುತ್ತಿದೆ? | ವಸತಿ ಇಲಾಖೆಯ ನಿಯಮಾನುಸಾರ ಒಮ್ಮೆ ಸರ್ಕಾರದಿಂದ ವಸತಿ ಸೌಲಭ್ಯವನ್ನು ಪಡೆದಿರುವಂತಹ ಸಾರ್ವಜನಿಕರು ಮತ್ತೊಮ್ಮೆ ವಸತಿ ಯೋಜನೆಯಡಿ ಮನೆಗಳನ್ನು ಪಡೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ, ಪ್ರಕೃತಿ ವಿಕೋಪದಿಂದ ಮನೆ ಹಾನಿ ಪರಿಹಾರ ಪಡೆದಿರುವಂತಹ ಸಂತ್ರಸ್ಥರು ಮತ್ತೊಮ್ಮೆ ವಸತಿ ಯೋಜನೆಯಡಿ ಪರಿಹಾರ ಪಡೆಯಲು ಸಾಧ್ಯವಾಗುವುದಿಲ್ಲ. |

ಕಂಇ 50 ಟಿಎನ್‌ಆರ್ 2022

(ಆರ್. ಅಶೋಕ)
ಕಂದಾಯ ಸಚಿವರು